## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 454

ಸದಸ್ಯರ ಹೆಸರು : ಡಾ|| ತಳವಾರ್ ಸಾಬಣ್ಣ

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 18.02.2022.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಳಗಾವಿ ಜಿಲ್ಲೆಯಲ್ಲಿ ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಸುಮಾರು ಶೇ.40ರಷ್ಟು ಬಸ್ಸುಗಳು ಸಂಪೂರ್ಣ ದುರಸ್ತಿಗೆ ಒಳಗಾಗಿದ್ದು, ಅವುಗಳನ್ನು ನಿಲ್ಲಿಸುವ ಬದಲು ರಸ್ತೆ ಮೇಲೆ ಓಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಳಗಾವಿ ಜಿಲ್ಲೆಯಲ್ಲಿ ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯ ಬೆಳಗಾವಿ ಮತ್ತು ಚಿಕ್ಕೋಡಿ ಎರಡು ವಿಭಾಗಗಳಿಂದ ಕ್ರಮವಾಗಿ 684 ಮತ್ತು 630 ವಾಹನಗಳಂತೆ, ಒಟ್ಟು 1314 ವಾಹನಗಳಿಂದ ಕಾರ್ಯಾಚರಣೆಗೊಳಿಸಿ ಜಿಲ್ಲೆಯ ಪ್ರಯಾಣಿಕರಿಗೆ ಸುರಕ್ಷಿತ ಸಾರಿಗೆ ಒದಗಿಸಲಾಗುತ್ತಿದೆ.<br><br>ಸದರಿ ಎಲ್ಲಾ ವಾಹನಗಳನ್ನು ಕಡ್ಡಾಯವಾಗಿ ಉತ್ತಮ ರೀತಿಯಲ್ಲಿ ನಿರ್ವಹಿಸಿ, ಯೋಗ್ಯವಾದ ವಾಹನಗಳನ್ನು ಮಾತ್ರ ಕಾರ್ಯಾಚರಣೆ ಕೈಗೊಳ್ಳಲಾಗುತ್ತಿದೆ. ನಿಗದಿತ 9 ಲಕ್ಷ ಕಿ.ಮೀ. ಕ್ರಮಿಸಿ ದುರಸ್ಥಿಗೆ ಯೋಗ್ಯವಲ್ಲದ ವಾಹನಗಳನ್ನು ನಿರುಪಯುಕ್ತಗೊಳಿಸುವ ಕಾರ್ಯ ಚಾಲ್ತಿಯಲ್ಲಿದೆ. |
| ಆ. | ಸಂಪೂರ್ಣ ದುರಸ್ತಿಗೆ ಒಳಗಾಗಬೇಕಾದ ಬಸ್ಸುಗಳನ್ನು ಸಾರಿಗೆಗೆ ಬಳಸುವುದರಿಂದ ಮಾರ್ಗ ಮಧ್ಯದಲ್ಲಿಯೇ ನಿಲ್ಲುತ್ತಿರುವುದರಿಂದ ಪ್ರಯಾಣಿಕರಿಗೆ ಮತ್ತು ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವುದು ನಿಜವೇ; | ಪ್ರಸ್ತುತ ಇರುವ ವಾಹನಗಳನ್ನು ತಾಂತ್ರಿಕವಾಗಿ ಸುಸ್ಥಿತಿಯಲ್ಲಿಟ್ಟುಕೊಂಡಿದ್ದು, ನಿಗದಿತ ಅವಧಿಯೊಳಗೆ ಎಲ್ಲಾ ತಾಂತ್ರಿಕ ಮುಂಜಾಗ್ರತ ನಿರ್ವಹಣೆಗಳನ್ನು ಮಾಡಲಾಗುತ್ತಿದೆ. ಅದೇ ರೀತಿ ಹೆಚ್ಚಿನ ಕವಚ ದುರಸ್ಥಿಗಾಗಿ ಇರುವ ವಾಹನಗಳನ್ನು ಪ್ರಾದೇಶಿಕ ಕಾರ್ಯಾಗಾರದಿಂದ ಪುನಶ್ಚೇತನಗೊಳಿಸಿ ಕಾರ್ಯಾಚರಣೆಗೆ ಒದಗಿಸಲಾಗುತ್ತಿದೆ. |
| ಇ. | ಬೆಳಗಾವಿ ನಗರದಿಂದ ದೂರದ ಹಾವೇರಿ, ಬೆಂಗಳೂರು ನಗರಗಳಿಗೆ ಪ್ರಯಾಣಿಕರು ಹಳೆಯ | ದೂರದ ಹಾವೇರಿ, ಬೆಂಗಳೂರು, ಇತ್ಯಾದಿ ನಗರದ ಮಾರ್ಗಗಳಿಗೆ ಕೋವಿಡ್-19ರ ಪೂರ್ವದಲ್ಲಿ (2018-19 ಹಾಗೂ 2019-20 ಸಾಲಿನಲ್ಲಿ) ಖರೀದಿಸಿದ |

...2

| | | |
|---|---|---|
| | ಬಸ್ಸುಗಳಲ್ಲಿಯೇ ಪ್ರಯಾಣಿಸಬೇಕಾಗಿದ್ದು, ಅವಘಡ ಸಂಭವಿಸಿದ್ದಲ್ಲಿ ಪರಿಹಾರ ನಿರೀಕ್ಷಿಸಬಹುದೇ; | ಹೊಸ ವಾಹನಗಳಿಂದ ಕಡ್ಡಾಯವಾಗಿ ಕಾರ್ಯಾಚರಣೆ ಕೈಗೊಳ್ಳಲಾಗುತ್ತಿದೆ. ಅವಘಡ (Break down) ಸಂಭವಿಸಿದಲ್ಲಿ ತ್ವರಿತವಾಗಿ ಪರ್ಯಾಯ ವ್ಯವಸ್ಥೆ ಕಲ್ಪಿಸಲಾಗುತ್ತಿದೆ. |
| ಈ | ಉತ್ತರ ಕರ್ನಾಟಕಕ್ಕೆ ಮಾತ್ರ ಹಳೆಯ ಬಸ್ಸುಗಳನ್ನು ನೀಡುತ್ತಿರುವುದರಿಂದ ಪ್ರಾದೇಶಿಕ ಅಸಮಾನತೆಗೆ ಪುಷ್ಠಿ ನೀಡಿದಂತಲ್ಲವೇ? (ವಿವರಿಸುವುದು) | ಪ್ರಸ್ತುತವಾಗಿ ಕೋವಿಡ್-19ರ ಹಿನ್ನೆಲೆಯಲ್ಲಿ ಕಳೆದ ಎರಡು ವರ್ಷಗಳಲ್ಲಿ ಯಾವುದೇ ಹೊಸ ವಾಹನಗಳನ್ನು ಖರೀದಿಸಿರುವುದಿಲ್ಲ. ಮುಂಬರುವ ದಿನಗಳಲ್ಲಿ ಕಾರ್ಯಾಚರಣೆಗೆ ಅವಶ್ಯಕತೆಗೆ ಅನುಗುಣವಾಗಿ ಹೊಸ ವಾಹನಗಳನ್ನು ಖರೀದಿಸಲಾಗುವುದರಿಂದ ಪ್ರಾದೇಶಿಕ ಅಸಮಾನತೆಯಾಗುವುದಿಲ್ಲ. |

ಸಂಖ್ಯೆ: ಟಿಡಿ 19 ಟಿಸಿಕ್ಯೂ 2022

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು